


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 1008(1330)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ವಿಷಯ : ಸರ್ಕಾರದ ಇಲಾಖೆಗಳ ವೆಬ್‌ಸೈಟ್‌ಗಳ ನಿಯಮಿತ ಮೇಲ್ವಿಚಾರಣೆ ಕುರಿತು

(ಅ) ಸರ್ಕಾರದ ಒಟ್ಟು ಇಲಾಖೆಗಳ ಸಂಖ್ಯೆ ಎಷ್ಟು; ನಿಗಮ ಮಂಡಳಿಗಳ ಸಂಖ್ಯೆ ಎಷ್ಟು; ಅವುಗಳಲ್ಲಿ ವೆಬ್‌ಸೈಟ್ ವಿಳಾಸವನ್ನು ಹೊಂದಿದ ಸರ್ಕಾರದ ಇಲಾಖೆ ಮತ್ತು ನಿಗಮಗಳ ಸಂಖ್ಯೆ ಎಷ್ಟು; ಅವು ಯಾವುವು; (ವೆಬ್‌ಸೈಟ್ ವಿಳಾಸದ ಮಾಹಿತಿಯನ್ನು ನೀಡುವುದು) ವೆಬ್‌ಸೈಟ್ ವಿಳಾಸವನ್ನು ಹೊಂದಿರದ ಸರ್ಕಾರ ಇಲಾಖೆ ಮತ್ತು ನಿಗಮಗಳ ಸಂಖ್ಯೆ ಎಷ್ಟು; ಅವು ಯಾವುವು; ಸಾರ್ವಜನಿಕರಿಗೆ ಅನುಕೂಲವಾಗುವ ದೃಷ್ಟಿಯಿಂದ ಪ್ರತಿಯೊಂದು ಇಲಾಖೆಯ ವೆಬ್‌ಸೈಟ್ ವಿಳಾಸ ಹೊಂದುವ ಬಗ್ಗೆ ಸರ್ಕಾರದಿಂದ ಕ್ರಮ ವಹಿಸಲಾಗುವುದೇ;

(ಆ) ಸರ್ಕಾರದ ವಿವಿಧ ಇಲಾಖೆಗಳ ವೆಬ್‌ಸೈಟ್ ನಿರ್ವಹಣೆಯನ್ನು ಯಾವ ಸಂಸ್ಥೆಯಿಂದ ನಿರ್ವಹಿಸಲಾಗುತ್ತಿದೆ; ವೆಬ್‌ಸೈಟ್‌ಗಳ ನಿರ್ವಹಣೆಗೆ ತಗಲುವ ವಾರ್ಷಿಕ ವೆಚ್ಚವೆಷ್ಟು; ಸರ್ಕಾರದ ಬಹುತೇಕ ಇಲಾಖೆಗಳು ಅಪಡೇಟ್ ಆಗದೇ ಹಳೆಯ ಮಾಹಿತಿಯನ್ನೇ ಹೊಂದಿರುವುದನ್ನು ಸರ್ಕಾರ ಗಮನಿಸಿದೆಯೇ; ವೆಬ್‌ಸೈಟ್ ನಿಯಮಿತ ಮೇಲ್ವಿಚಾರಣೆಗೆ ಸರ್ಕಾರದ ಕ್ರಮವೇನು;

(ಇ) ರಾಜ್ಯದಲ್ಲಿ ಆನ್‌ಲೈನ್‌ನಲ್ಲಿ ಮಾಹಿತಿ ಹಕ್ಕು ಅರ್ಜಿಯನ್ನು ಸ್ವೀಕರಿಸಲಾಗುತ್ತಿದೆಯೇ; ಹೌದಾದಲ್ಲಿ ಯಾವ ಯಾವ ಕಛೇರಿಗಳಲ್ಲಿ ಸ್ವೀಕರಿಸಲಾಗುತ್ತಿದೆ; ಆನ್‌ಲೈನ್‌ನಲ್ಲಿ ಆರ್‌ಟಿಐ ಅರ್ಜಿಯನ್ನು ಸಲ್ಲಿಸುವ ಮತ್ತು ಮಾಹಿತಿಯನ್ನು ಪಡೆಯುವ ಕ್ರಮ ಯಾವುದು? (ಸಂಪೂರ್ಣ ಮಾಹಿತಿಯನ್ನು ನೀಡುವುದು)